

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 16-03-2021 ಪ್ರಶ್ನೆ ಸಂಖ್ಯೆ : 1137 (1416)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 16-03-2021

ಉತ್ತರಿಸುವ ಸಚಿವರು: ಮಾನ್ಯ ಸಹಕಾರ ಸಚಿವರು

ವಿಷಯ : ಮೈಸೂರು ಕುಂಬಾರ ಹಾಸ್ಟೆಲ್‌ನ ಕಟ್ಟಡ ದುರುಪಯೋಗದ ಬಗ್ಗೆ

(ಅ) ಮೈಸೂರಿನಲ್ಲಿರುವ ಕುಂಬಾರ ಹಾಸ್ಟೆಲ್ ನಿವೇಶನ (ಕುವೆಂಪು ನಗರ) ಯಾರ ಹೆಸರಿಗೆ ಹಾಗೂ ಯಾವ ಉದ್ದೇಶಕ್ಕಾಗಿ ನೀಡಲಾಗಿದೆ ;

(ಆ) ಹಾಸ್ಟೆಲ್ ಕಟ್ಟಡವನ್ನು ಬೇರೆಯವರಿಗೆ ಪರಭಾರೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು ;

(ಇ) ಇತ್ತೀಚೆಗೆ ವಿದ್ಯಾರ್ಥಿಗಳನ್ನು ಒಂದು ಮೂಲೆಗೆ ಹಾಕಿ ಬಾಕಿ ಉಳಿದಿರುವ ಸ್ಥಳ ಮತ್ತು ಕಟ್ಟಡವನ್ನು ನರ್ಸಿಂಗ್ ಕಾಲೇಜು ನಡೆಸಲು ಪರಭಾರೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮವೇನು ;

(ಈ) ಈ ಸಂಘದ ಅಧ್ಯಕ್ಷರು/ನಿರ್ದೇಶಕರು ಅವ್ಯವಹಾರದಲ್ಲಿ ಭಾಗಿಯಾಗಿರುವ ಬಗ್ಗೆ ದೂರುಗಳು ದಾಖಲಾಗಿದ್ದರೂ ಸರ್ಕಾರ ಕ್ರಮ ಕೈಗೊಳ್ಳದಿರಲು ಕಾರಣವೇನು ?